# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೯<br>Volume 149 | ಬೆಂಗಳೂರು, ಗುರುವಾರ, ಡಿಸೆಂಬರ್ ೪, ೨೦೧೪ (ಮಾರ್ಗಶಿರ ೧೩, ಶಕ ವರ್ಷ ೧೯೩೬)<br>Bengaluru, Thursday, December 4, 2014 (Margashira 13, Shaka Varsha 1936) | ಸಂಚಿಕೆ ೪೮<br>Issue 48 |
|---|---|---|


## ಭಾಗ ೩

## ಸರ್ಕಾರದ ಮತ್ತು ಖಾಸಗಿ ಜಾಹೀರಾತುಗಳು, ಲೋಕಸೇವಾ ಆಯೋಗದ ಜಾಹೀರಾತುಗಳು, ನೇಮಕಾತಿ ಸಮಿತಿಗಳ ಜಾಹೀರಾತುಗಳು

### ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರ ಕಾರ್ಯಾಲಯ

**ಅಧಿಸೂಚನೆ**

**ಸಂಖ್ಯೆ: ಆಡಳಿತ/ನೇಮಕಾತಿ(ಬೆ)/16603/2014 ಮೈಸೂರು, ದಿನಾಂಕ 13.11.2014.**

ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಮೈಸೂರು ಘಟಕದಲ್ಲಿ ಖಾಲಿ ಇರುವ ಬೆರಳಚ್ಚುಗಾರರ ಹುದ್ದೆಗಳಿಗೆ ಅರ್ಹ ಅಭ್ಯರ್ಥಿಗಳಿಂದ ಈ ಅಧಿಸೂಚನೆಯಲ್ಲಿ ನಿಗದಿಪಡಿಸಿ ಲಗತ್ತಿಸಿರುವ ಅರ್ಜಿ ನಮೂನೆಯಲ್ಲಿ **ದಿನಾಂಕ 17.11.2014ರಿಂದ** ಅರ್ಜಿಗಳನ್ನು ಆಹ್ವಾನಿಸಲಾಗಿದೆ.

**ಅರ್ಜಿಗಳನ್ನು ಸಲ್ಲಿಸಲು ಕಡೆಯ ದಿನಾಂಕ: 12.12.2014ರ ಅಪರಾಹ್ನ 05.00 ಗಂಟೆ.**

**ವಿಶೇಷ ಸೂಚನೆ:**

1. ಅರ್ಜಿಗಳು ಕಡ್ಡಾಯವಾಗಿ ನಿಗದಿತ ನಮೂನೆಯಲ್ಲಿಯೇ ಇರಬೇಕು.
2. ಅಭ್ಯರ್ಥಿಗಳು ಅರ್ಜಿಯಲ್ಲಿ ತಮ್ಮ ಚಾಲ್ತಿಯಲ್ಲಿರುವ ದೂರವಾಣಿ ಸಂಖ್ಯೆ ಹಾಗೂ ಈ–ಮೇಲ್ ವಿಳಾಸವನ್ನು ಕಡ್ಡಾಯವಾಗಿ ನಮೂದಿಸಬೇಕು.
3. ಅರ್ಜಿ ನಮೂನೆಗಳನ್ನು ಈ ಕಛೇರಿಯಿಂದ ಮಾರಾಟ ಮಾಡಲಾಗುವುದಿಲ್ಲ. ಆದರೆ, ನಮೂನೆಯನ್ನು ಈ ಕಛೇರಿಯ ವೆಬ್‌ಸೈಟ್ http://ecourts.gov.in/mysore ಇಂದ ಪ್ರತಿ ಮಾಡಿಕೊಂಡು ಬಳಸಬಹುದು.

**ಹುದ್ದೆಯ ಹೆಸರು: ಬೆರಳಚ್ಚುಗಾರರು**

ಖಾಲಿ ಹುದ್ದೆಗಳು – 10

ವೇತನ ಶ್ರೇಣಿ : 11600-200-12000-250-13000-300-14200-350–15600-400– 17200-450-19000–500–21000

**ಹುದ್ದೆಗಳ ವರ್ಗೀಕರಣ:**

| ಮೀಸಲಾತಿ | ಇತರೆ | ಮಹಿಳೆ | ಗ್ರಾಮೀಣ | ಮಾ.ಸೈ | ಕ.ಮಾ.ಅ | ಅಂ.ಅ | ಒಟ್ಟು |
|---|---|---|---|---|---|---|---|
| ಪ.ಪಂಗಡ | – | – | 01 | – | – | – | 01 |
| ಪ್ರವರ್ಗ– 1 | – | – | – | – | – | 01* | 01 |
| II – ಎ | – | 01 | – | – | – | – | 01 |
| II – ಬಿ | – | – | – | – | – | 01* | 01 |
| III – ಎ | – | – | – | – | – | 01* | 01 |
| III –ಬಿ | – | 01 | – | – | – | 01* | 02 |
| ಸಾಮಾನ್ಯ | – | 01 | 01 | – | – | 01** | 03 |
| **ಒಟ್ಟು** | – | **03** | **02** | – | – | **05** | **10** |

* ದೃಷ್ಟಿಮಾಂದ್ಯ / ದೃಷ್ಟಿದೋಷವುಳ್ಳ ಅಭ್ಯರ್ಥಿ (Blind & Low Vision)

** ಶ್ರವಣದೋಷವುಳ್ಳ ಅಭ್ಯರ್ಥಿ (Hearing Impaired)

**ವಿದ್ಯಾರ್ಹತೆ :** ಎಸ್.ಎಸ್.ಎಲ್.ಸಿ. ಅಥವಾ ತತ್ಸಮಾನ ಪರೀಕ್ಷೆ ಮತ್ತು ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿಯು ನಡೆಸುವ ಕನ್ನಡ ಮತ್ತು ಇಂಗ್ಲೀಷ್ ಎರಡೂ ಭಾಷೆಯಲ್ಲೂ ಹಿರಿಯ ಶ್ರೇಣಿ ಬೆರಳಚ್ಚು ಅಥವಾ ತತ್ಸಮಾನ ಪರೀಕ್ಷೆಯಲ್ಲಿ ಅರ್ಜಿಗಳನ್ನು ಸ್ವೀಕರಿಸಲು ನಿಗದಿಪಡಿಸಿರುವ ಕಡೆಯ ದಿನಾಂಕದೊಳಗೆ ಉತ್ತೀರ್ಣರಾಗಿರಬೇಕು.

**ಆಯ್ಕೆಯ ವಿಧಾನ :** ಅರ್ಹತಾ ಪರೀಕ್ಷೆಗಳಲ್ಲಿ ಗಳಿಸಿರುವ ಒಟ್ಟು ಶೇಕಡಾವಾರು ಅಂಕಗಳು ಮತ್ತು 15 ನಿಮಿಷಗಳ ಉಕ್ತಲೇಖನದಲ್ಲಿ ಕೊಡುವ ವಿಷಯವನ್ನು ಬೆರಳಚ್ಚು ಮಾಡುವ ಅರ್ಹತಾ ಪರೀಕ್ಷೆಯಲ್ಲಿ ಗಳಿಸುವ ಅಂಕಗಳು ಮತ್ತು ಸಂದರ್ಶನದಲ್ಲಿ ಗಳಿಸುವ ಅಂಕಗಳ ಆಧಾರದ ಮೇಲೆ ಆಯ್ಕೆ ಮಾಡಲಾಗುವುದು.

**ಟಿಪ್ಪಣಿ :** ಅರ್ಹತಾ ಪರೀಕ್ಷೆಯು ಗರಿಷ್ಠ 100 ಅಂಕಗಳನ್ನು ಒಳಗೊಂಡಿದ್ದು, ಅದರಲ್ಲಿ ತೇರ್ಗಡೆಯಾಗಲು ಕನಿಷ್ಠ 50 ಅಂಕಗಳನ್ನು ಪಡೆಯಬೇಕು ಮತ್ತು ಸಂದರ್ಶನವು 05 ಅಂಕಗಳನ್ನೊಳಗೊಂಡಿರುತ್ತದೆ.

**ವಿಶೇಷ ಟಿಪ್ಪಣಿ :** ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ ಹಾಗೂ ಹಿಂದುಳಿದ ವರ್ಗಗಳಲ್ಲಿ, ಮಹಿಳಾ ಅಭ್ಯರ್ಥಿಗಳು, ಮಾಜಿ ಸೈನಿಕ ಅಭ್ಯರ್ಥಿಗಳು, ಯೋಜನಾ ನಿರಾಶ್ರಿತ ಅಭ್ಯರ್ಥಿಗಳು, ಗ್ರಾಮೀಣ ಅಭ್ಯರ್ಥಿಗಳು ಹಾಗೂ ಕನ್ನಡ ಮಾಧ್ಯಮ ಅಭ್ಯರ್ಥಿಗಳ ಮೀಸಲಾತಿಗಳಿಗೆ ಅರ್ಹ ಅಭ್ಯರ್ಥಿಗಳು ಲಭ್ಯವಿರದೇ ಇದ್ದ ಪಕ್ಷದಲ್ಲಿ, ಆ ಹುದ್ದೆಗಳನ್ನು ಆಯಾ ಪಂಗಡಗಳ ಇತರೆ ಅಭ್ಯರ್ಥಿಗಳಿಂದ ಭರ್ತಿ ಮಾಡಲಾಗುವುದು. ಆಯಾ ಪಂಗಡಗಳ ಇತರೆ ಅಭ್ಯರ್ಥಿಗಳೂ ಸಹ ಲಭ್ಯವಾಗದಿದ್ದಲ್ಲಿ, ಪರಿಶಿಷ್ಟ ಜಾತಿ ಹಾಗೂ ಪರಿಶಿಷ್ಟ ಪಂಗಡಗಳಿಗೆ ಮೀಸಲಾದ ಹುದ್ದೆಗಳನ್ನು ಹೊರತುಪಡಿಸಿ, ಇನ್ನುಳಿದ ಹಿಂದುಳಿದ ವರ್ಗಗಳ ಹುದ್ದೆಗಳನ್ನು ಸಾಮಾನ್ಯ ವರ್ಗದ ಅಭ್ಯರ್ಥಿಗಳಿಂದ ಭರ್ತಿ ಮಾಡಲಾಗುವುದು. ದೃಷ್ಟಿಮಾಂದ್ಯ / ದೃಷ್ಟಿದೋಷವುಳ್ಳ (Blind & Low Vision) ಹಾಗೂ ಶ್ರವಣದೋಷವುಳ್ಳ ಅಭ್ಯರ್ಥಿಗಳು (Hearing Impaired) ಲಭ್ಯವಿಲ್ಲದೇ ಇದ್ದಲ್ಲಿ, ಆ ಹುದ್ದೆಗಳನ್ನು ಆಯಾ ಪಂಗಡಗಳ, ಗುರುತಿಸಲಾದ ಇತರೇ ಅಂಗವಿಕಲ ಅಭ್ಯರ್ಥಿಗಳಿಂದ ಭರ್ತಿ ಮಾಡಲಾಗುವುದು. ಆಯಾ ಪಂಗಡಗಳ ಅಂಗವಿಕಲ ಅಭ್ಯರ್ಥಿಗಳೂ ಸಹ ಲಭ್ಯವಾಗದಿದ್ದಲ್ಲಿ, ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳಿಗೆ ಮೀಸಲಾದ ಹುದ್ದೆಗಳನ್ನು ಹೊರತುಪಡಿಸಿ, ಇನ್ನುಳಿದ ಹಿಂದುಳಿದ ವರ್ಗಗಳ ಹುದ್ದೆಗಳನ್ನು ಸಾಮಾನ್ಯ ವರ್ಗದ ಅಂಗವಿಕಲ ಅಭ್ಯರ್ಥಿಗಳಿಂದ ಭರ್ತಿ ಮಾಡಲಾಗುವುದು.

ಅರ್ಹತಾ ಪರೀಕ್ಷೆಗೆ ಹಾಗೂ ಸಂದರ್ಶನಕ್ಕೆ ಆಯ್ಕೆಯಾಗುವ ಅಭ್ಯರ್ಥಿಗಳು ಮೈಸೂರು ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರ ಕಛೇರಿಗೆ ತಮ್ಮ ಸ್ವಂತ ಖರ್ಚಿನಲ್ಲಿ ಹಾಜರಾಗತಕ್ಕದ್ದು.

**ವಯೋಮಿತಿಃ**

ಅರ್ಜಿಗಳನ್ನು ಸ್ವೀಕರಿಸಲು ನಿಗದಿಪಡಿಸಿದ ಕೊನೆಯ ದಿನಾಂಕದಂದು ಅಭ್ಯರ್ಥಿಯು

ಅ. ಕನಿಷ್ಠ 18 ವರ್ಷ ವಯಸ್ಸನ್ನು ಪೂರೈಸಿರತಕ್ಕದ್ದು.

ಆ. ಗರಿಷ್ಠ ವಯೋಮಿತಿ

| | |
|---|---|
| ಸಾಮಾನ್ಯ ವರ್ಗ | 35 ವರ್ಷ |
| 2ಎ, 2ಬಿ, 3ಎ, 3ಬಿ | 38 ವರ್ಷ |
| ಪ.ಪಂಗಡ, ಪ್ರವರ್ಗ - 1 | 40 ವರ್ಷ |

ಅಭ್ಯರ್ಥಿಗಳು ಅರ್ಜಿಯನ್ನು ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕದಂದು ಗರಿಷ್ಠ ವಯಸ್ಸನ್ನು ಮೀರಿರಕೂಡದು.

**ವಯೋಮಿತಿ ಸಡಿಲಿಕೆ :**

ಈ ಕೆಳಗಿನ ಸಂದರ್ಭಗಳಲ್ಲಿ ನೇಮಕಾತಿಯ ಗರಿಷ್ಠ ವಯೋಮಿತಿಯನ್ನು ಆಯಾ ಅಭ್ಯರ್ಥಿಗಳಿಗೆ ನಮೂದಿಸಿರುವ ಮಟ್ಟಿಗೆ ಹೆಚ್ಚಿಸಲಾಗುವುದು.

1. ಅಭ್ಯರ್ಥಿಯು ಕರ್ನಾಟಕ ರಾಜ್ಯ ಸರ್ಕಾರದಲ್ಲಿ ಅಥವಾ ಸ್ಥಳೀಯ ಪ್ರಾಧಿಕಾರದಲ್ಲಿ ಅಥವಾ ರಾಜ್ಯ ಅಧಿನಿಯಮ ಅಥವಾ ಕೇಂದ್ರ ಅಧಿನಿಯಮದ ಮೂಲಕ ಸ್ಥಾಪನೆಯಾದ ಅಥವಾ ರಾಜ್ಯ ಅಧಿನಿಯಮ ಅಥವಾ ಕೇಂದ್ರ ಅಧಿನಿಯಮದ ಮೂಲಕ ಸ್ಥಾಪನೆಗೊಂಡು ಕರ್ನಾಟಕ ರಾಜ್ಯ ಸರ್ಕಾರದ ಸ್ವಾಮ್ಯ ಅಥವಾ ನಿಯಂತ್ರಣದಲ್ಲಿರುವ ನಿಗಮದಲ್ಲಿ ಹುದ್ದೆ ಹೊಂದಿರುವ ಅಥವಾ ಹಿಂದೆ ಹೊಂದಿದ್ದಲ್ಲಿ ಗರಿಷ್ಠ ವಯೋಮಿತಿಯನ್ನು ಅವರು ಎಷ್ಟು ವರ್ಷಗಳ ಅವಧಿಗೆ ಹುದ್ದೆಯಲ್ಲಿ ಸೇವೆ ಸಲ್ಲಿಸಿರುವರೋ ಅಥವಾ ಹಿಂದೆ ಸಲ್ಲಿಸಿದ್ದರೋ ಅಷ್ಟು ವರ್ಷಗಳು ಅಥವಾ 10 ವರ್ಷಗಳ ಅವಧಿ, ಎರಡರಲ್ಲಿ ಯಾವುದು ಕಡಿಮೆಯೋ ಅಷ್ಟು ವರ್ಷಗಳ ಸಡಿಲಿಕೆಯನ್ನು ನೀಡಲಾಗುವುದು.
2. ಅಭ್ಯರ್ಥಿಯು ಅಂಗವಿಕಲನಾಗಿದ್ದಲ್ಲಿ, ವಿಧವೆಯಾಗಿದ್ದಲ್ಲಿ ಮತ್ತು ಜೀತ ಕಾರ್ಮಿಕನಾಗಿದ್ದಲ್ಲಿ 10 ವರ್ಷಗಳು.
3. ಅಭ್ಯರ್ಥಿಯು ಕರ್ನಾಟಕ ರಾಜ್ಯದಲ್ಲಿರುವ ಭಾರತ ಸರ್ಕಾರದ ಜನಗಣತಿ ಸಂಸ್ಥೆಯಲ್ಲಿ ಈಗ ಹುದ್ದೆಯನ್ನು ಹೊಂದಿದ್ದ ಪಕ್ಷದಲ್ಲಿ ಗರಿಷ್ಠ ವಯೋಮಿತಿಯನ್ನು ಅಭ್ಯರ್ಥಿಯು ಎಷ್ಟು ವರ್ಷಗಳ ಅವಧಿಗೆ ಆ ಹುದ್ದೆಯಲ್ಲಿ ಸೇವೆ ಸಲ್ಲಿಸುತ್ತಿರುವರೊ ಅಥವಾ ಹಿಂದೆ ಸೇವೆ ಸಲ್ಲಿಸಿದ್ದಾರೊ ಅಷ್ಟು ವರ್ಷಗಳ ಅಥವಾ 05 ವರ್ಷಗಳ ಅವಧಿ, ಅದರಲ್ಲಿ ಯಾವುದು ಕಡಿಮೆಯೋ ಅಷ್ಟು ವರ್ಷಗಳು.
4. ಅಭ್ಯರ್ಥಿಯು ನ್ಯಾಷನಲ್ ಕೆಡೆಟ್ ಕಾರ್ಪ್ಸ್‌ನಲ್ಲಿ ಪೂರ್ಣ ಕಾಲಿಕ ಪರೀಕ್ಷಕರಾಗಿ ಸೇವೆ ಸಲ್ಲಿಸಿ ಬಿಡುಗಡೆಯಾಗಿರುವ ವ್ಯಕ್ತಿಯಾಗಿದ್ದರೆ ಅಂತಹ ಕೆಡೆಟ್ ಪರೀಕ್ಷಕನಾಗಿ ಸೇವೆ ಸಲ್ಲಿಸಿದ್ದಷ್ಟು ವರ್ಷಗಳು.
5. ಅಭ್ಯರ್ಥಿಯು ರಾಜ್ಯ ಸರ್ಕಾರದಿಂದ ಪುರಸ್ಕೃತವಾದ ಗ್ರಾಮೀಣ ಔದ್ಯಮೀಕರಣ ಯೋಜನೆಯ ಮೇರೆಗೆ ನೇಮಕಗೊಂಡು ಗ್ರಾಮಸಮೂಹ ಪರಿಶೀಲಕರಾಗಿ ಈಗ ಕೆಲಸ ಮಾಡುತ್ತಿದ್ದರೆ ಅಥವಾ ಹಿಂದೆ ಇದ್ದ ಪಕ್ಷದಲ್ಲಿ ಅಂತಹ ಗ್ರಾಮ ಸಮೂಹ ಪರಿಶೀಲಕರಾಗಿ ಸೇವೆ ಸಲ್ಲಿಸಿದ್ದಷ್ಟು ವರ್ಷಗಳು.

**ಪರಿವೀಕ್ಷಣಾ ಅವಧಿ :**

ಆಯ್ಕೆಯಾದ ಅಭ್ಯರ್ಥಿಗಳು ಕರ್ನಾಟಕ ಸೇವಾ ನಿಯಮ (ಪರಿವೀಕ್ಷಣೆ ನಿಯಮಗಳು) 1977ರ ಪ್ರಕಾರ 02 ವರ್ಷಗಳ ಕಾಲ ಪರಿವೀಕ್ಷಣಾ ಅವಧಿಯಲ್ಲಿರುತ್ತಾರೆ. ಈ ಅವಧಿಯಲ್ಲಿ ಅಭ್ಯರ್ಥಿಗಳು ಅವರುಗಳ ಹುದ್ದೆಗೆ ನಿಗದಿಪಡಿಸಿರುವ ಇಲಾಖಾ ಪರೀಕ್ಷೆಗಳಲ್ಲಿ, ಕನ್ನಡ ಭಾಷಾ ಪರೀಕ್ಷೆಯಲ್ಲಿ ಮತ್ತು ಕಂಪ್ಯೂಟರ್ ಸಾಕ್ಷರತಾ ಪರೀಕ್ಷೆಯಲ್ಲಿ ಉತ್ತೀರ್ಣರಾಗಬೇಕು.

**ಸರ್ಕಾರಿ ಸೇವೆಯಲ್ಲಿರುವ ಅಭ್ಯರ್ಥಿಗಳು ಅರ್ಜಿ ಸಲ್ಲಿಸುವ ವಿಧಾನ :**

ಸರ್ಕಾರಿ ಸೇವೆಯಲ್ಲಿರುವ ಅಭ್ಯರ್ಥಿಗಳು ತಮ್ಮ ನೇಮಕಾತಿ ಪ್ರಾಧಿಕಾರದಿಂದ ನಿರಾಕ್ಷೇಪಣಾ ಪ್ರಮಾಣಪತ್ರವನ್ನು ಪಡೆದು, ಅರ್ಜಿಗಳನ್ನು ಸಂಬಂಧಿತ ನೇಮಕಾತಿ ಪ್ರಾಧಿಕಾರದ ಮೂಲಕ ಕಳುಹಿಸಬೇಕು.

**ಅರ್ಜಿ ಸಲ್ಲಿಸುವ ವಿಧಾನ :**

ಈ ಪ್ರಕಟಣೆಯಲ್ಲಿ ಲಗತ್ತಿಸಿರುವ ಅರ್ಜಿ ನಮೂನೆಯನ್ನು ಬೆರಳಚ್ಚು ಮಾಡಿ / ಕಂಪ್ಯೂಟರ್ ಮೂಲಕ ತಯಾರಿಸಿ, **ಅರ್ಜಿಯನ್ನು ತಮ್ಮ ಸ್ವಂತ ಕೈಬರಹದಲ್ಲಿ ತಮಗೆ ಅನ್ವಯಿಸುವ ಎಲ್ಲಾ ಅಂಕಣಗಳನ್ನು ಭರ್ತಿ ಮಾಡುವುದು.** ಅಭ್ಯರ್ಥಿಯು ತನ್ನ ಇತ್ತೀಚಿನ ಪಾಸ್‌ಪೋರ್ಟ್ ಅಳತೆಯ ಭಾವಚಿತ್ರವನ್ನು ಅರ್ಜಿಯ ಮೇಲೆ ಅಂಟಿಸಿ, ಅದರ ಮೇಲೂ ಸಹ ಸಹಿ ಮಾಡುವುದು ಹಾಗೂ ಅರ್ಜಿ ನಮೂನೆಯ ಕೊನೆಯಲ್ಲಿ ಘೋಷಣೆಯ ನಂತರ ಸಹಿ ಮಾಡುವುದು. ಹುದ್ದೆಗೆ ಸಂಬಂಧಿಸಿದ ವಿದ್ಯಾರ್ಹತೆ, ವಯಸ್ಸು ಮತ್ತು ಕೋರಿರುವ ಮೀಸಲಾತಿಗೆ ಸಂಬಂಧಿಸಿದಂತೆ ಪ್ರಮಾಣ ಪತ್ರಗಳನ್ನು ಅಧಿಕೃತ ಅಧಿಕಾರಿಗಳಿಂದ ಪಡೆದು, ಅವುಗಳ ನಕಲುಗಳನ್ನು ಸ್ವಯಂ ದೃಢೀಕರಿಸಿ ಅರ್ಜಿಯೊಂದಿಗೆ ಲಗತ್ತಿಸಿ ಅರ್ಜಿಯನ್ನು **"ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಮೈಸೂರು – 570 005", ಇವರಿಗೆ ದಿನಾಂಕಃ 12.12.2014ರ ಅಪರಾಹ್ನ 05.00 ಗಂಟೆಯೊಳಗೆ** ತಲುಪುವಂತೆ ಕಳುಹಿಸುವುದು. ಅರ್ಜಿಯನ್ನು ಕಳುಹಿಸುವ ಲಕೋಟೆ ಮೇಲೆ ಅಭ್ಯರ್ಥಿಯು ಯಾವ ಹುದ್ದೆಗೆ ಅರ್ಜಿಯನ್ನು ಸಲ್ಲಿಸುತ್ತಾನೆ ಎಂಬುದರ ಬಗ್ಗೆ ಹುದ್ದೆಯ ಹೆಸರನ್ನು ನಮೂದಿಸುವುದು.

**ಅಭ್ಯರ್ಥಿಗಳು ಅರ್ಜಿಯೊಂದಿಗೆ ಲಗತ್ತಿಸಬೇಕಾದ ದಾಖಲಾತಿಗಳು :**

ಅಭ್ಯರ್ಥಿಗಳು ಈ ಕೆಳಕಂಡ ದಾಖಲಾತಿಗಳ **ಸ್ವಯಂ ದೃಢೀಕರಿಸಿದ** ಒಂದು ಪ್ರತಿಯನ್ನು ಅರ್ಜಿಯೊಂದಿಗೆ ಲಗತ್ತಿಸಬೇಕು. ಸ್ವಯಂ ದೃಢೀಕರಿಸಿರದ ಲಗತ್ತುಗಳನ್ನು ಪರಿಗಣಿಸಲಾಗುವುದಿಲ್ಲ. ಸ್ವಯಂ ದೃಢೀಕರಿಸಿರದ ಲಗತ್ತುಗಳನ್ನು ಹೊರತುಪಡಿಸಿದರೂ ಸಹ ಅಭ್ಯರ್ಥಿಯ ಅರ್ಜಿಯು ಸಿಂಧುವಾಗುವಂತಿದ್ದಲ್ಲಿ ಮಾತ್ರ ಅಂತಹ ಅರ್ಜಿಗಳನ್ನು ಪುರಸ್ಕರಿಸಲಾಗುವುದು, ಇಲ್ಲದಿದ್ದಲ್ಲಿ ತಿರಸ್ಕರಿಸಲಾಗುವುದು.

1. ಇತ್ತೀಚಿನ ಪಾಸ್‌ಪೋರ್ಟ್ ಅಳತೆಯ ಭಾವಚಿತ್ರವನ್ನು ನಿಗದಿತ ಸ್ಥಳದಲ್ಲಿ ಅಂಟಿಸಿರಬೇಕು.
2. ಜನ್ಮ ದಿನಾಂಕದ ದೃಢೀಕರಣಕ್ಕಾಗಿ ಎಸ್.ಎಸ್.ಎಲ್.ಸಿ. ಅಂಕ ಪಟ್ಟಿ / ಕ್ಯುಮುಲೇಟಿವ್ ರೆಕಾರ್ಡ್ / ಇನ್ನಾವುದೇ ಅಧಿಕೃತ ದಾಖಲಾತಿಗಳು.
3. ವಿದ್ಯಾರ್ಹತೆಯ ಬಗ್ಗೆ ಅಂಕಪಟ್ಟಿಗಳು.
4. ಪರಿಶಿಷ್ಟ ಪಂಗಡದ ಅಭ್ಯರ್ಥಿಗಳು ನಮೂನೆ 'ಡಿ' ಯಲ್ಲಿ, ಪ್ರವರ್ಗ–1ರ ಅಭ್ಯರ್ಥಿಗಳು ನಮೂನೆ 'ಇ' ಯಲ್ಲಿ ಮತ್ತು 2ಎ, 2ಬಿ, 3ಎ ಮತ್ತು 3ಬಿ ಗೆ ಸೇರಿದ ಅಭ್ಯರ್ಥಿಗಳು ನಮೂನೆ 'ಎಫ್'ನಲ್ಲಿ ಸಂಬಂಧಿಸಿದ ತಹಸೀಲ್ದಾರರಿಂದ ಜಾತಿ ಮತ್ತು ಆದಾಯ ಪ್ರಮಾಣ ಪತ್ರಗಳನ್ನು ಪಡೆದು ಸಲ್ಲಿಸಬೇಕು.
5. ಗ್ರಾಮೀಣ ಮೀಸಲಾತಿಯನ್ನು ಕೋರುವ ಅಭ್ಯರ್ಥಿಗಳು ಸರ್ಕಾರಿ ಆದೇಶ ಸಂಖ್ಯೆಃಸಿಆಸುಇ/96/ಸೇನನಿ/2005, ದಿನಾಂಕಃ 10.08.2005ರ ಪ್ರಕಾರ ನಿಗದಿತ ನಮೂನೆ – 2ರಲ್ಲಿ ಅಧಿಕೃತ ಅಧಿಕಾರಿಗಳಿಂದ ಪಡೆದು ಅದನ್ನು ಸಂಬಂಧಿಸಿದ ಕ್ಷೇತ್ರ ಶಿಕ್ಷಣಾಧಿಕಾರಿಗಳಿಂದ ಮೇಲು ಸಹಿ ಮಾಡಿಸಿ ಸಲ್ಲಿಸಬೇಕು. ಗ್ರಾಮೀಣ ಮೀಸಲಾತಿ ಕೋರುವ ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ ಹಾಗೂ ಹಿಂದುಳಿದ ವರ್ಗಗಳಿಗೆ ಸೇರಿದ ಅಭ್ಯರ್ಥಿಗಳ ಮೀಸಲಾತಿ ಪ್ರಮಾಣ ಪತ್ರಗಳು ತಿರಸ್ಕೃತಗೊಂಡಲ್ಲಿ ಅವರು ಗ್ರಾಮೀಣ ಮೀಸಲಾತಿಗೂ ಅನರ್ಹರಾಗುತ್ತಾರೆ.
6. ಗ್ರಾಮೀಣ ಮೀಸಲಾತಿಯನ್ನು ಕೋರುವ ಸಾಮಾನ್ಯ ವರ್ಗದ ಅಭ್ಯರ್ಥಿಗಳು ಪ್ರಮಾಣ ಪತ್ರ ನಮೂನೆ – 2ರ ಜೊತೆ ನಮೂನೆ – 1ರಲ್ಲೂ ದೃಢೀಕರಣ ಪತ್ರವನ್ನು ಸಲ್ಲಿಸುವುದು.
7. ಅಂಗವಿಕಲ ಮೀಸಲಾತಿಯನ್ನು ಕೋರುವ ಅಭ್ಯರ್ಥಿಗಳು ವೈದ್ಯಕೀಯ ಪ್ರಮಾಣ ಪತ್ರವನ್ನು ದಿನಾಂಕ 19.11.2005ರ ಸರ್ಕಾರದ ಅಧಿಕೃತ ಜ್ಞಾಪನಾ ಸಂಖ್ಯೆಃಸಿಆಸುಇ/115/ಸೇನನಿ/2005ರಲ್ಲಿ ನಿಗದಿಪಡಿಸಿದ ನಮೂನೆಯಲ್ಲಿ ಅಂಗವಿಕಲತೆಯ ಬಗ್ಗೆ ಜಿಲ್ಲಾ ಮಟ್ಟದ ವೈದ್ಯಕೀಯ ಮಂಡಳಿಯಿಂದ ಪ್ರಮಾಣ ಪತ್ರವನ್ನು ಪಡೆದು ಸಲ್ಲಿಸಬೇಕು.
8. ವಿಧವೆಯರು, ಜೀತ ಕಾರ್ಮಿಕರು ಹಾಗೂ ವಯೋಮಿತಿ ರಿಯಾಯಿತಿಗೆ ಅರ್ಹರಾದ ಇನ್ನಿತರರು ವಯೋಮಿತಿ ರಿಯಾಯಿತಿ ಕೋರಲು ಸಕ್ಷಮ ಪ್ರಾಧಿಕಾರದಿಂದ ಪಡೆದ ಪ್ರಮಾಣ ಪತ್ರವನ್ನು ಸಲ್ಲಿಸುವುದು.
9. ಸ್ವಯಂ ವಿಳಾಸವಿರುವ ರೂ.5/– ಅಂಚೆ ಚೀಟಿ ಅಂಟಿಸಿರುವ ಲಕೋಟೆಯನ್ನು ಅರ್ಜಿಯೊಂದಿಗೆ ಲಗತ್ತಿಸುವುದು.

**ವಿಶೇಷ ಸೂಚನೆ :**

**ಅರ್ಜಿಯೊಂದಿಗೆ ಲಗತ್ತಿಸುವ ಎಲ್ಲಾ ಪ್ರಮಾಣ ಪತ್ರಗಳು ಅರ್ಜಿ ಸಲ್ಲಿಸಲು ನಿಗದಿಪಡಿಸಿರುವ ಕೊನೆಯ ದಿನಾಂಕದೊಳಗೆ ಲಗತ್ತಿಸಿರಬೇಕು ಹಾಗೂ ಕೊನೆಯ ದಿನಾಂಕದಂದು ಸಿಂಧುವಾಗಿರಬೇಕು ಮತ್ತು ಕಡ್ಡಾಯವಾಗಿ ಸ್ವಯಂ ದೃಢೀಕರಿಸಿರಬೇಕು.**

ಯಾವುದೇ ಅಭ್ಯರ್ಥಿಯು ಸರ್ಕಾರಿ/ಸರ್ಕಾರೇತರ ಅಧಿಕಾರಿಗಳಿಂದ ತನ್ನ ಅಭ್ಯರ್ಥಿತ್ವದ ಬಗ್ಗೆ ಪ್ರಭಾವ ಬೀರಿದರೆ ಅಂತಹ ಅಭ್ಯರ್ಥಿಗಳು ನೇಮಕಾತಿಗೆ ಅರ್ಹರಾಗುವುದಿಲ್ಲ.

ಯಾವುದೇ ಅಭ್ಯರ್ಥಿಯು ಸಂದರ್ಶನದ ಬಗ್ಗೆ ಮಾಹಿತಿ ಬರದಿದ್ದರೆ, ಅವರು ಸಂದರ್ಶನಕ್ಕೆ ಅರ್ಹರಲ್ಲ ಎಂದು ತಿಳಿಯುವುದು ಮತ್ತು ಈ ಬಗ್ಗೆ ಯಾವುದೇ ಪತ್ರ ವ್ಯವಹಾರವನ್ನು ಮಾಡಲಾಗುವುದಿಲ್ಲ.

ಅರ್ಜಿಗಳನ್ನು ಸ್ವೀಕರಿಸಲು ನಿಗದಿಪಡಿಸಿದ ದಿನಾಂಕವು ಸಾರ್ವಜನಿಕ ರಜೆಯಾಗಿದ್ದರೆ ಮುಂದಿನ ಕಛೇರಿ ಕೆಲಸದ ದಿನವನ್ನು ಅರ್ಜಿ ಸಲ್ಲಿಸಲು ಕಡೆಯ ದಿನಾಂಕ ಎಂದು ತಿಳಿಯುವುದು.

**ಕೆ.ಎಸ್. ಮುದಗಲ್**
ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು,
ಮೈಸೂರು.

**ಅರ್ಜಿ ನಮೂನೆ**

ಅಭ್ಯರ್ಥಿಯ ಇತ್ತೀಚಿನ ಪಾಸ್‌ಪೋರ್ಟ್ ಅಳತೆಯ ಭಾವಚಿತ್ರದ ಮೇಲೆ ಸಹಿ ಮಾಡಿ ಅಂಟಿಸುವುದು

ರವರಿಗೆ

ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು,
ಮೈಸೂರು.

ದಿನಾಂಕಃ 13.11.2014ರ ತಮ್ಮ ಕಛೇರಿಯ ಅಧಿಸೂಚನೆ ಸಂಖ್ಯೆ ಆಡಳಿತ/ನೇಮಕಾತಿ(ಬೆ)/16603/2014 ಮೇರೆಗೆ ನಾನು **ಬೆರಳಚ್ಚುಗಾರರ** ಹುದ್ದೆಗೆ ಅರ್ಜಿಯನ್ನು ಸಲ್ಲಿಸುತ್ತಿದ್ದೇನೆ ಮತ್ತು ಈ ಕೆಳಕಂಡ ಮಾಹಿತಿಯನ್ನು ಒದಗಿಸುತ್ತಿದ್ದೇನೆ.

| | | | | |
|---|---|---|---|---|
| 1 | ಅಭ್ಯರ್ಥಿಯ ಹೆಸರು (ದಪ್ಪ ಅಕ್ಷರಗಳಲ್ಲಿ) | | | |
| 2 | ತಂದೆ / ಗಂಡನ ಹೆಸರು | | | |
| 3 | ತಾಯಿಯ ಹೆಸರು | | | |
| 4 | ಜನ್ಮ ದಿನಾಂಕ | | | |
| 5 | ವಯಸ್ಸು (ಅರ್ಜಿಯನ್ನು ಸ್ವೀಕರಿಸಲು ನಿಗದಿಪಡಿಸಿರುವ ಕೊನೆಯ ದಿನಾಂಕದಂದು ಅಭ್ಯರ್ಥಿಯ ವಯಸ್ಸು) | ವರ್ಷಗಳು | ತಿಂಗಳುಗಳು | ದಿನಗಳು |
| | | | | |
| 6 | ಲಿಂಗ | ಪುರುಷ | ಮಹಿಳೆ | ಇತರೆ |
| | | | | |
| 7 | ರಾಷ್ಟ್ರೀಯತೆ | | | |
| 8 | ಧರ್ಮ ಮತ್ತು ಜಾತಿ | | | |
| 9 | ವೈವಾಹಿಕ ಸ್ಥಿತಿ | ವಿವಾಹಿತ | ಅವಿವಾಹಿತ | |
| | | | | |
| 10 | ವಿವಾಹಿತರಾದಲ್ಲಿ ಒಬ್ಬರಿಗಿಂತ ಹೆಚ್ಚು ಜೀವಂತ ಗಂಡ ಅಥವಾ ಹೆಂಡತಿ ಇದ್ದಾರೆಯೇ? | | | |
| 11 | ನೀವು ಯಾವುದಾದರೂ ಕ್ರಿಮಿನಲ್ ಮೊಕದ್ದಮೆಯಲ್ಲಿ ಭಾಗಿಯಾಗಿದ್ದೀರ? | ಹೌದು | ಇಲ್ಲ | |
| | | | | |

| | | | | | | |
|---|---|---|---|---|---|---|
| 12 | ನೀವು ಸರ್ಕಾರಿ ಸೇವೆಯಿಂದ ಅಥವಾ ಇನ್ನಾವುದಾದರು ಸೇವೆಯಿಂದ ವಜಾ ಆಗಿದ್ದೀರ ಅಥವಾ ತೆಗೆದುಹಾಕಲ್ಪಟ್ಟಿದ್ದೀರ? | ಹೌದು | | ಇಲ್ಲ | | |
| 13 | ಕೋರುವ ಮೀಸಲಾತಿಗಳು<br>(ಕೋರುವ ಮೀಸಲಾತಿಯನ್ನು ✔ ಚಿಹ್ನೆ ಹಾಕುವುದರ ಮೂಲಕ ಗುರುತಿಸಿ ಪ್ರಮಾಣ ಪತ್ರದ ಸ್ವಯಂ ದೃಢೀಕೃತ ನಕಲನ್ನು ಲಗತ್ತಿಸಬೇಕು) | ಸಾಮಾನ್ಯ | ಪ.ಜಾತಿ | ಪ.ಪಂಗಡ | ಪ್ರವರ್ಗ–1 | |
| | | | | | | |
| | | 2ಎ | 2ಬಿ | 3ಎ | 3ಬಿ | |
| | | | | | | |
| 14 | ನೀವು ಈ ಯಾವುದಾದರು ಮೀಸಲಾತಿ ಅಡಿಯಲ್ಲಿ ಬರುತ್ತೀರ?<br>(ಸೇರುವ ಮೀಸಲಾತಿಯನ್ನು ✔ ಚಿಹ್ನೆ ಹಾಕುವುದರ ಮೂಲಕ ಗುರುತಿಸಿ ಪ್ರಮಾಣ ಪತ್ರದ ಸ್ವಯಂ ದೃಢೀಕೃತ ನಕಲನ್ನು ಲಗತ್ತಿಸಬೇಕು) | ಗ್ರಾಮೀಣ | ಕ.ಮಾ.ಅ | ಮಾ.ಸೈ | ಯೋ.ನಿ.ಅ. | ಅಂ.ವಿ |
| | | | | | | |
| 15 | ವಿದ್ಯಾರ್ಹತೆಃ<br>(ಸ್ವಯಂ ದೃಢೀಕೃತ ಪ್ರಮಾಣ ಪತ್ರಗಳನ್ನು ಸಲ್ಲಿಸತಕ್ಕದ್ದು) | ತೇರ್ಗಡೆಯಾದ ತಿಂಗಳು ಮತ್ತು ವರ್ಷ | | ಗರಿಷ್ಠ ಅಂಕಗಳು | ಗಳಿಸಿದ ಅಂಕಗಳು | |
| | ಎಸ್. ಎಸ್. ಎಲ್. ಸಿ. | | | | | |
| | ಕನ್ನಡ ಬೆರಳಚ್ಚು (ಹಿರಿಯ ಶ್ರೇಣಿ) | | | | | |
| | ಆಂಗ್ಲ ಬೆರಳಚ್ಚು (ಹಿರಿಯ ಶ್ರೇಣಿ) | | | | | |
| | ತಾಂತ್ರಿಕ ವಿದ್ಯಾರ್ಹತೆ | | | | | |
| 16 | ನೀವು ಪ್ರಸ್ತುತ ಸರ್ಕಾರಿ ಸೇವೆಯಲ್ಲಿರುವಿರಾ? | ಹೌದು | | ಇಲ್ಲ | | |
| 17 | ನೀವು ಪ್ರಸ್ತುತ ಸರ್ಕಾರಿ ಸೇವೆಯಲ್ಲಿದ್ದಲ್ಲಿ, ನೇಮಕಾತಿ ಪ್ರಾಧಿಕಾರದಿಂದ ಪಡೆದ ನಿರಾಕ್ಷೇಪಣ ಪತ್ರದ ನಕಲನ್ನು ಲಗತ್ತಿಸಿದ್ದೀರಾ? | ಹೌದು | | ಇಲ್ಲ | | |
| 18 | ಅಭ್ಯರ್ಥಿಯ ಖಾಯಂ ವಿಳಾಸ, ದೂರವಾಣಿ ಸಂಖ್ಯೆ ಹಾಗೂ ಈ–ಮೇಲ್ ಐಡಿ. | | | | | |
| 19 | ಅಭ್ಯರ್ಥಿಯ ಅಂಚೆ ವಿಳಾಸ, ದೂರವಾಣಿ ಸಂಖ್ಯೆ ಹಾಗೂ ಈ–ಮೇಲ್ ಐಡಿ. | | | | | |
| 20 | ನಿಮ್ಮ ಸ್ವವಿಳಾಸವಿರುವ ರೂ.5/–ರ ಅಂಚೆ ಚೀಟಿ ಅಂಟಿಸಿರುವ ಲಕೋಟೆಯನ್ನು ಲಗತ್ತಿಸಿದ್ದೀರಾ? | | | | | |

ಈ ಮೇಲ್ಕಂಡ ಮಾಹಿತಿಗಳು ಸತ್ಯವಾಗಿರುತ್ತದೆ ಎಂದು ಪ್ರಮಾಣೀಕರಿಸುತ್ತೇನೆ ಹಾಗೂ ಒಂದು ವೇಳೆ ಮೇಲ್ಕಂಡ ಮಾಹಿತಿಗಳು ತಪ್ಪು ಎಂದು ಕಂಡು ಬಂದಲ್ಲಿ ನನ್ನ ಅಭ್ಯರ್ಥಿತ್ವವನ್ನು ರದ್ದುಪಡಿಸಬಹುದೆಂದು ಘೋಷಿಸುತ್ತೇನೆ.

**ಅಭ್ಯರ್ಥಿಯ ಸಹಿ**

ಸ್ಥಳ :

ದಿನಾಂಕ :

**P.R. 128**

**SC-10**

**FORM-I**

**(See Rule 9)**

**Department of Municipal**

**OFFICE OF THE TMC, HANGAL**

**NOTIFICATION, DATED: 10-09-2014**

**Shri : MANJUNATH B HARIJAN** working as Peon (Group D) in the Municipal department of/office of Town Municipal Council Hangal is permitted to change his name to **MANJUNATH B DODDAMANI.**

**PD C/n. 112** Deputy Commissioner,
**SC - 10** HAVERI.

**FORM-IV**

**(See Rule 12)**

**NOTICE**

It is hereby notified that the undersigned has changed his name from **SHARANAPPA GANGAVVA HARIJAN to SHARANAPPA GANGAVVA BEVINAMARAD**

**PD C/n. 114** **SHARANAPPA GANGAVVA HARIJAN**
**SC - 10**

**FORM-I**

**(See Rule 9)**

**Department of Police**

**Superintendent of Police, Department of Police, Uttar Kannada, Karwar**

**NOTIFICATION**

**Shri: KUBERAPPA S/O SAKRAPPA LAMANI** working as Civil Police Head Constable in the Joida Police Station, Department of Police /office of Uttar Kannada, Joida Police Station is permitted to change his name to **KUBERAPPA S/o SAKRAPPA DODAMANI**

**PD C/n. 115** **Superintendent of Police,**
**SC - 10** Uttar Kannada District, Karwar

**ನಮೂನೆ–1**

**(ನಿಯಮ 9ನ್ನು ನೋಡಿ)**

**ಖಜಾನೆ ಇಲಾಖೆ**

**ಖಜಾನೆ ನಿರ್ದೇಶಕರ ಕಛೇರಿ, 1ನೇ ಮಹಡಿ, ಪೋಡಿಯಮ್ ಬ್ಲಾಕ್, ವಿಶ್ವೇಶ್ವರಯ್ಯ ಕೇಂದ್ರ, ಡಾ॥ ಅಂಬೇಡ್ಕರ್ ವೀದಿ, ಬೆಂಗಳೂರು–01**

**ಅಧಿಸೂಚನೆ ದಿನಾಂಕ 02–09–2014**

**ಶ್ರೀಮತಿ ಮೀನಾ,** ಇವರು ಜಿಲ್ಲಾ ಖಜಾನೆ (ನಗರ), ಬೆಂಗಳೂರು ಇವರ ಕಾರ್ಯಲಯದಲ್ಲಿ ಗ್ರೂಪ್'ಡಿ' ಕೆಲಸ ನಿರ್ವಹಿಸುತ್ತಿದ್ದು, ಇವರ ಹೆಸರನ್ನು ಸಿ.ಜೆ.ಮೀನಾ ಎಂಬುದಾಗಿ ಬದಲಾವಣೆಗೆ ಅನುಮತಿ ನೀಡಲಾಗಿದೆ.

**PD C/n. 116** ನಿರ್ದೇಶಕರು
**SC - 10** ಖಜಾನೆ ಇಲಾಖೆ, ಬೆಂಗಳೂರು

**FORM-IV**

**(See Rule 12)**

**NOTICE**

It is hereby notified that the undersigned has changed her name from **KAVERI AMRUT MIRAJKAR to KAVERI SUNIL BONGALE**

**PD C/n. 117** **KAVERI AMRUT MIRAJKAR**

## ಅಧ್ಯಕ್ಷರು, ಆಯ್ಕೆ ಮತ್ತು ನೇಮಕಾತಿ ಪ್ರಾಧಿಕಾರ ಹಾಗೂ ಜಿಲ್ಲಾಧಿಕಾರಿ, ಬೆಂಗಳೂರು ಜಿಲ್ಲೆ, ಬೆಂಗಳೂರು

### ಅಧಿಸೂಚನೆ

**ಸಂ. ಸಿಬ್ಬಂದಿ ( 4 ) ಗ್ರಾ.ಲೆ ಸಿಆರ್ 26/2014-15 ,ದಿನಾಂಕ: 06-11-2014**

ವಿಷಯ: ಬೆಂಗಳೂರು ಜಿಲ್ಲಾ ಕಂದಾಯ ಇಲಾಖೆಯಲ್ಲಿ ಖಾಲಿ ಇರುವ ಗ್ರಾಮಲೆಕ್ಕಿಗರ ಹುದ್ದೆಗಳನ್ನು ನೇರ ನೇಮಕಾತಿ ಮೂಲಕ ಭರ್ತಿ ಮಾಡುವ ಬಗ್ಗೆ.

ಉಲ್ಲೇಖ: 1) ಸರ್ಕಾರದ ಆದೇಶ ಸಂ. ಕಂಇ 33 ಡಿಎಸ್‌ಪಿ 2012 ದಿನಾಂಕ: 05-06-2012.

2) ಸರ್ಕಾರದ ಅ.ಸ.ಪ.ಸಂ. ಕಂಇ 33 ಡಿಎಸ್‌ಪಿ 2012 ದಿನಾಂಕ: 21-06-2012.

3) ಸರ್ಕಾರದ ಆದೇಶ ಸಂ. ಸಿಆಸುಇ 08 ಸೆಹಿಮ 95, ದಿನಾಂಕ: 20-06-1995.

4) ಸರ್ಕಾರದ ಆದೇಶ ಸಂ. ಸಿಆಸುಇ 06 ಸೆನನಿ 2001, ದಿನಾಂಕ: 13-02-2001ರ ಅನುಬಂಧ.

5) ಸರ್ಕಾರದ ಆದೇಶ ಸಂ. ಕಂಇ 666 ಎಎಸ್‌ಡಿ 2012, ದಿನಾಂಕ: 04-07-2013.

ಬೆಂಗಳೂರು ನಗರ ಜಿಲ್ಲಾ ಕಂದಾಯ ಇಲಾಖೆಯಲ್ಲಿ ಖಾಲಿ ಇರುವ ಒಟ್ಟು 45 ಗ್ರಾಮಲೆಕ್ಕಿಗರ ವೃಂದದ ಹುದ್ದೆಗಳನ್ನು ನೇರ ನೇಮಕಾತಿ ಮೂಲಕ ಭರ್ತಿ ಮಾಡಲು ಉಲ್ಲೇಖದ ಸರ್ಕಾರದ ಆದೇಶದಂತೆ ಆನ್‌ಲೈನ್ (Online) ಮೂಲಕ ಅರ್ಜಿಗಳನ್ನು ಕರೆಯಲು ಅರ್ಹ ಅಭ್ಯರ್ಥಿಗಳಿಂದ ಈ ಕೆಳಕಾಣಿಸಿದ ಷರತ್ತಿಗೊಳಪಡಿಸಿ ಅರ್ಜಿಗಳನ್ನು ಆಹ್ವಾನಿಸಲಾಗಿದೆ.

**1) ಹುದ್ದೆಗಳ ವಿವರ:**

| | | |
|---|---|---|
| ಅ)ಹುದ್ದೆ ಹಾಗೂ ಸಂಖ್ಯೆ | : | ಗ್ರಾಮಲೆಕ್ಕಿಗರ ಹುದ್ದೆಗಳು ಒಟ್ಟು – **45** |
| ಆ)ವೇತನ ಶ್ರೇಣಿ | : | 11600-200-12000-250-13000-300-14200-350-15600-400-17200-450-19000-500-21000 |

**2)ಹುದ್ದೆಗಳ ವರ್ಗೀಕರಣ:**

ಎ) 2013ರಲ್ಲಿ ಹೊರಡಿಸಿದ ಅಧಿಸೂಚನೆಯಂತೆ ಭರ್ತಿಯಾಗದೇ ಇರುವ ಖಾಲಿ ಹುದ್ದೆಗಳನ್ನು ತುಂಬ ಬೇಕಾದ ರೋಸ್ಟರ್ ಬಿಂದುಗಳ ವಿವರ:(ರೋಸ್ಟರ್ ಬಿಂದು 19, 38, 40, 41, 43, 45)

| ಕ್ರ. ಸಂ | ವರ್ಗ | ಸಾಮಾನ್ಯ | ಮಹಿಳೆ | ಗ್ರಾಮೀಣ | ಯೋಜನಾ ನಿರಾಶ್ರಿತರು | ಅಂ.ವಿ.ಅ. | ಒಟ್ಟು |
|---|---|---|---|---|---|---|---|
| 1 | ಪ.ಜಾ | 1 | – | – | – | – | 1 |
| 2 | ಪ್ರ-3(ಬಿ) | 1 | 1 | – | – | – | 2 |
| 3 | ಪ್ರ-2(ಎ) | 1 | – | – | – | – | 1 |
| 4 | ಸಾಮಾನ್ಯ | 2 | – | – | – | – | 2 |
| | **ಒಟ್ಟು** | **6** | – | – | – | – | **6** |

**(ಬಿ)ಹುದ್ದೆಗಳ ವರ್ಗೀಕರಣ:**

2014ರ ಪ್ರಸ್ತುತ ಅಧಿಸೂಚನೆಯಂತೆ ಉಳಿಕೆ 39 ಖಾಲಿ ಹುದ್ದೆಗಳನ್ನು ತುಂಬಬೇಕಾದ ರೋಸ್ಟರ್ ಬಿಂದುಗಳ ವಿವರ :

| ಕ್ರ ಸಂ | ವರ್ಗ | ಸಾಮಾನ್ಯ | ಮಹಿಳೆ | ಗ್ರಾಮೀಣ | ಯೋಜನಾ ನಿರಾಶ್ರಿತರು | ಅಂ.ವಿ.ಅ. | ಕನ್ನಡ ಮಾಧ್ಯಮ | ಮಾ.ಸೈ | ಒಟ್ಟು |
|---|---|---|---|---|---|---|---|---|---|
| 1 | ಪ.ಜಾ | 1 | 2 | 2 | 0 | 0 | 0 | 1 | 6 |
| 2 | ಪ.ಪಂ | 0 | 1 | 0 | 0 | 0 | 0 | 0 | 1 |
| 3 | ಪ್ರ-1 | 0 | 0 | 1 | 1 | 0 | 0 | 0 | 2 |
| 4 | ಪ್ರ-2(ಎ) | 1 | 2 | 1 | 0 | 0 | 0 | 1 | 5 |
| 5 | ಪ್ರ-2(ಬಿ) | 0 | 0 | 1 | 0 | 0 | 0 | 0 | 1 |
| 6 | ಪ್ರ-3(ಎ) | 0 | 0 | 1 | 0 | 1 | 0 | 0 | 2 |
| 7 | ಪ್ರ-3(ಬಿ) | 1 | 1 | – | – | – | – | – | 2 |
| 8 | ಸಾಮಾನ್ಯ | 4 | 6 | 5 | 1 | 1 | 1 | 2 | 20 |
| | **ಒಟ್ಟು** | | | | | | | | **39** |

**3)ಶೈಕ್ಷಣಿಕ ವಿದ್ಯಾರ್ಹತೆ:** ದ್ವಿತೀಯ ವರ್ಷದ ಪಿ.ಯು.ಸಿ ಅಥವಾ 12ನೇ ತರಗತಿ (CBSE/ICSE) ಪರೀಕ್ಷೆಯಲ್ಲಿ ಉತ್ತೀರ್ಣರಾಗಿರಬೇಕು ಮತ್ತು ಕಂಪ್ಯೂಟರ್ ಅನುಭವ ಹೊಂದಿರಬೇಕು.

**4)ವಯೋಮಿತಿ:** ಅರ್ಜಿ ಸಲ್ಲಿಸಲು ಕೊನೆಯ ದಿನಾಂಕದಂದು ಕೆಳಕಾಣಿಸಿದ ವಯೋಮಿತಿ ಹೊಂದಿರತಕ್ಕದ್ದು.

| | | |
|---|---|---|
| ಪ.ಜಾ/ಪ.ಪಂ. ಪ್ರವರ್ಗ–1 | : | ಕನಿಷ್ಠ 18 ವರ್ಷ ಗರಿಷ್ಠ 40 ವರ್ಷ |
| ಇತರೆ ಹಿಂದುಳಿದ ವರ್ಗ | : | ಕನಿಷ್ಠ 18 ವರ್ಷ ಗರಿಷ್ಠ 38 ವರ್ಷ |
| ಸಾಮಾನ್ಯ ವರ್ಗ | : | ಕನಿಷ್ಠ 18 ವರ್ಷ ಗರಿಷ್ಠ 35 ವರ್ಷ |

ಈ ಕೆಳಗಿನ ಸಂದರ್ಭಗಳಲ್ಲಿ ನೇಮಕಾತಿಯ ಗರಿಷ್ಠ ವಯೋಮಿತಿಯನ್ನು ಕೆಳಗೆ ತಿಳಿಸಿರುವಷ್ಟರ ಮಟ್ಟಿಗೆ ಹೆಚ್ಚಿಸಲಾಗುವುದು.

ಅ) ಅಭ್ಯರ್ಥಿಯು ಮಾಜಿ ಸೈನಿಕನಾಗಿದ್ದಲ್ಲಿ 3 ವರ್ಷಗಳು ಅಥವಾ ಕೇಂದ್ರ ಸಶಸ್ತ್ರ ದಳದಲ್ಲಿ ಎಷ್ಟು ವರ್ಷ ಸೇವೆ ಸಲ್ಲಿಸಿರುವರೋ ಅಷ್ಟು ವರ್ಷಗಳು ಸೇರಲ್ಪಡುತ್ತವೆ.

ಆ) ಅಭ್ಯರ್ಥಿಯು ಅಂಗವಿಕಲರಾಗಿದ್ದಲ್ಲಿ 10 ವರ್ಷಗಳು

ಇ) ಅಭ್ಯರ್ಥಿಯು ವಿಧವೆಯಾಗಿದ್ದಲ್ಲಿ 10 ವರ್ಷಗಳು

5) ಅನ್‌ಲೈನ್ (Online)ಮೂಲಕ ಅರ್ಜಿಗಳನ್ನು ಸಲ್ಲಿಸಲು ನಿಗಧಿಪಡಿಸಿದ ಅವಧಿ: ದಿನಾಂಕ: 10–11–2014 ರಿಂದ 10–12–2014 ರ ಸಂಜೆ 5–00 ಗಂಟೆವರೆಗೆ

**6) ಅರ್ಜಿಯ ನಮೂನೆ:**

1) ಆನ್‌ಲೈನ್ (Online) ಮೂಲಕ ಅರ್ಜಿ ಸಲ್ಲಿಸುವ ವಿಧಾನ:

ಅರ್ಜಿಯನ್ನು ಆನ್‌ಲೈನ್ (Online) (ಎಲೆಕ್ಟ್ರಾನಿಕ್ ಮಾರ್ಗ) ಮುಖಾಂತರ ಮಾತ್ರ ಸಲ್ಲಿಸತಕ್ಕದ್ದಾಗಿದೆ. ಅರ್ಜಿಗಳನ್ನು ಖುದ್ದಾಗಿ ಅಥವಾ ಅಂಚೆ ಮೂಲಕ ಪ್ರತ್ಯೇಕವಾಗಿ ಸಲ್ಲಿಸಲು ಅವಕಾಶವಿರುವುದಿಲ್ಲ. ಅಭ್ಯರ್ಥಿಯು ಬೆಂಗಳೂರು ನಗರ ಜಿಲ್ಲೆಯ ಜಿಲ್ಲಾಧಿಕಾರಿಗಳ ಅಧಿಕೃತ ವೆಬ್ ಸೈಟ್ ಆದ **http://164.100.80.10/vabngurban**ರ ಮೇಲೆ ಕ್ಲಿಕ್ ಮಾಡಿದಾಗ ತೆರೆದ ಕಂಪ್ಯೂಟರ್ ಪರದೆಯ ಮೇಲೆ ಬರುವ ತಂತ್ರಾಂಶದಲ್ಲಿ ಅರ್ಜಿಯನ್ನು ತುಂಬಬೇಕು. ಅಭ್ಯರ್ಥಿಯು ಆನ್‌ಲೈನ್ ಅರ್ಜಿಯನ್ನು ಭರ್ತಿ ಮಾಡಿದ ನಂತರ submit button ಅನ್ನು ಒತ್ತಿದರೆ ಅರ್ಜಿ ಸಂಖ್ಯೆ (Reference Number) ಸೃಷ್ಠಿಯಾಗುತ್ತದೆ. ಅರ್ಜಿ ತುಂಬಿದ ನಂತರ Reference Number (6 ಸಂಖ್ಯೆ) ಬರೆದಿಡಬೇಕು. ಇದನ್ನು ಶುಲ್ಕ ಪಾವತಿ ಪುಟದಲ್ಲಿ ನಮೂದಿಸಬೇಕಾಗುತ್ತದೆ. ಶುಲ್ಕ ಪಾವತಿಸಲು ಅನುಸರಿಸಬೇಕಾದ ವಿಧಾನ:

1) ಎಸ್.ಬಿ.ಐ. ಬ್ಯಾಂಕಿನ 'SBI COLLECT' ಪುಟಕ್ಕೆ Redirect ಮಾಡುತ್ತದೆ. ಇಲ್ಲಿ ಕಡೆಯಲ್ಲಿ check box ಅನ್ನು Tick ಮಾಡಿ **"**proceed**"** ಬಟನ್ ಒತ್ತಿರಿ.

2) ಮುಂದೆ **"**State of Corporate/Institite" ನಲ್ಲಿ **"** Karnataka" Select ಮಾಡಿ, **"**Type of corporate/Institute **"** ನಲ್ಲಿ **"** Recruitment" Select ಮಾಡಿ GO ಬಟನ್ click ಮಾಡುವುದು.

3) ಮುಂದಿನ ಪುಟದಲ್ಲಿ **"**Recruitment Name**"** ನಲ್ಲಿ "Office of the Deputy Commissioner, Bangalore Urban District " select ಮಾಡಿ submit ಬಟನ್ ಒತ್ತಿ.

4) Selection payment category ಯಲ್ಲಿ (400–00 ರೂ.ಗಳ ಶುಲ್ಕ ಪಾವತಿಸಲು) General, 2A, 2B, 3A, 3B Women ಅಭ್ಯರ್ಥಿಗಳು click ಮಾಡಿ, 200–00 ಶುಲ್ಕ ಪಾವತಿಸಲು SC/ST/CAT-1/Ex-Servicemen ಅಭ್ಯರ್ಥಿಗಳು ಎರಡನೇ Option click ಮಾಡಬೇಕು.

5) ಮುಂದೆ candidate ಹೆಸರು Application Reference No., Date of Birth, Mobile No. Category, Reservatiodn Quota ವನ್ನು ಸರಿಯಾಗಿ ತಪ್ಪು ಮಾಡದೆ ಹಾಗೂ ಕೆಳಗೆ ಮತ್ತೊಮ್ಮೆ Name, Date of Birth, Mobile No. ಅನ್ನು ಅರ್ಜಿಯಲ್ಲಿ ನಮೂದಿಸಿದ ಹಾಗೇಯೇ ತುಂಬಬೇಕು.

6) ನಂತರ ತೋರಿಸುವ Image ಅನ್ನು entry ಮಾಡಿ submit ಒತ್ತಿ ಮುಂದಿನ ಪುಟದಲ್ಲಿ ನೀವು ತುಂಬಿರುವುದು ಸರಿಯಾಗಿದ್ದರೆ Confirm & verify Details ನಲ್ಲಿ Confirm ಮಾಡಿ.
ವಿ.ಸೂ:– " ತಪ್ಪು ಹೆಸರು, ಮೊಬೈಲ್ ಸಂಖ್ಯೆ. Application Reference No ಹಾಕಿದಲ್ಲಿ ಅರ್ಜಿಯನ್ನು ತಿರಸ್ಕರಿಸಲಾಗುತ್ತದೆ. (10 digit ಮಾತ್ರ) ಹಾಗೂ ಕಟ್ಟಿದ ಶುಲ್ಕ (6 digit ಮಾತ್ರ) ಹಿಂದಿರುಗಿಸಲಾಗುವುದಿಲ್ಲ.

7) Confirm ಆನ ನಂತರ Internet Banking Debit card, Credit card, off line ಮಾಡುತ್ತದೆ. ಇಲ್ಲಿ ಕಡೆಯಲ್ಲಿ ಚೆಕ್ ಬಾಕ್ಸ್ ಅನ್ನು ಟಿಕ್ ಮಾಡಿ ಬಟನ್ ಒತ್ತಿರಿ.ಇಂಟರ್‌ನೆಟ್ ಬ್ಯಾಂಕಿಂಗ್, ಡೆಬಿಟ್ ಕಾರ್ಡ್, ಕ್ರೆಡಿಟ್ ಕಾರ್ಡ್ ಮತ್ತು ಆಫ್‌ಲೈನ್ ಅಂದರೆ ಎಸ್‌ಬಿಐ ನ ಯಾವುದೇ ಶಾಖೆಯಲ್ಲಿ ನಗದು ಪಾವತಿ ಮಾಡಬಹುದು. ಇಂಟರ್‌ನೆಟ್ ಬ್ಯಾಂಕಿಂಗ್, ಡೆಬಿಟ್ ಕಾರ್ಡ್, ಕ್ರೆಡಿಟ್ ಕಾರ್ಡ್ ಮೂಲಕ ಪಾವತಿ ಮಾಡಿದಲ್ಲಿ ಪರದೆಯಲ್ಲಿ Acknowledgement slip ಮೂಡುತ್ತದೆ. ಇದರ ಪ್ರಿಂಟನ್ನು ಅಭ್ಯರ್ಥಿಯು ಪಡೆಯತಕ್ಕದ್ದು. ಎಸ್.ಬಿ.ಐ ಶಾಖೆಯಲ್ಲಿ ಪಾವತಿ ಮಾಡುವುದಾದರೆ ಅಭ್ಯರ್ಥಿಗಳು ಆನ್‌ಲೈನ್ ನಲ್ಲಿ ಮೂಡುವ ಚಲನ್ನು ತೆಗೆದುಕೊಳ್ಳತಕ್ಕದ್ದು. ಈ ಚಲನ್‌ನೊಂದಿಗೆ ಅರ್ಜಿ ಶುಲ್ಕ ಮತ್ತು ಬ್ಯಾಂಕ್ ನಿಗದಿಪಡಿಸಿದ ಸೇವಾ ಶುಲ್ಕವನ್ನು 'ಸ್ಟೇಟ್ ಬ್ಯಾಂಕ್ ಆಫ್ ಇಂಡಿಯಾ'ದ ಯಾವುದಾದರೂ ಶಾಖೆಯಲ್ಲಿ, ಇರುವ On line Application ರಲ್ಲಿನ (ಚಾಲ್ತಿ ಖಾತೆ) ಪಾವತಿಸಬೇಕು. ಪಾವತಿಸುವಾಗ ಚಲನ್‌ನಲ್ಲಿ ಅರ್ಜಿಯ ಸಂಖ್ಯೆ (Reference Number) ಮತ್ತು ಅಭ್ಯರ್ಥಿಯ ಹೆಸರು ಸರಿಯಾಗಿ ನಮೂದಾಗಿದೆಯೇ ಎಂದು ಪರಿಶೀಲಿಸುವುದು. ಅಭ್ಯರ್ಥಿಗಳು ಸ್ವೀಕೃತಿ ಪತ್ರವನ್ನು ಮತ್ತು ಚಲನ್ ಪಾವತಿಯ ಒಂದು ಪ್ರತಿಯನ್ನು ಕಡ್ಡಾಯವಾಗಿ ತಮ್ಮ ಬಳಿ ಇರಿಸಿಕೊಳ್ಳತಕ್ಕದ್ದು. ಇನ್ನೊಂದು ಚಲನ್ ಪ್ರತಿ ಬ್ಯಾಂಕ್ ಬಳಿ ಇರುತ್ತದೆ. ಭಾವ ಚಿತ್ರವನ್ನು ಮೇಲೆ ತಿಳಿಸಿದ ವೆಬ್‌ಸೈಟ್‌ನಲ್ಲಿ ಅಪ್‌ಲೋಡ್ ಮಾಡತಕ್ಕದ್ದು. ಬ್ಯಾಂಕಿನಲ್ಲಿ ನಿಗದಿತ ಅರ್ಜಿ ಶುಲ್ಕ ಪಾವತಿಸಲು ಹಾಗೂ ಆನ್‌ಲೈನ್ ಮೂಲಕ ಅರ್ಜಿ ಸಲ್ಲಿಸಲು ಕೊನೆಯ ದಿನಾಂಕ: 10–12–2014 ಆಗಿರುತ್ತದೆ. ಮೂಲ ದಾಖಲೆಗಳನ್ನು ಹಾಗೂ ಅದರ ಒಂದು ಸೆಟ್ ದೃಢೀಕೃತ ಪ್ರತಿಗಳನ್ನು ಪರಿಶೀಲನೆಗೆ ನಿಗದಿಪಡಿಸಿದ ದಿನಾಂಕದಂದು ಈ ಕೆಳಗಿನ ನೇಮಕಾತಿ ಪ್ರಾಧಿಕಾರಕ್ಕೆ ಹಾಜರುಪಡಿಸತಕ್ಕದ್ದು.

**" ಅಧ್ಯಕ್ಷರು, ಆಯ್ಕೆ ಮತ್ತು ನೇಮಕಾತಿ ಪ್ರಾಧಿಕಾರ ಹಾಗೂ ಜಿಲ್ಲಾಧಿಕಾರಿ, ಬೆಂಗಳೂರು ನಗರ ಜಿಲ್ಲೆ, ಕೆ.ಜಿ. ರಸ್ತೆ, ಬೆಂಗಳೂರು–560 009"**

ಯಾವುದೇ ರೀತಿಯ ದಾಖಲೆಗಳನ್ನು ಅರ್ಜಿಯೊಂದಿಗೆ ಸಲ್ಲಿಸುವ ಅಗತ್ಯ ಇರುವುದಿಲ್ಲ. ಆದರೆ, ಮೂಲ ದಾಖಲಾತಿಯ ಪರಶೀಲನಾ ದಿನಾಂಕದಂದು ನಿಗದಿತ ನಮೂನೆಯಲ್ಲಿ ಅರ್ಜಿ ಸಲ್ಲಿಸಲು ಕೊನೆಯ ದಿನಾಂಕದ ಒಳಗಾಗಿಪಡೆದುಕೊಂಡ ದೃಢೀಕೃತ ದಾಖಲೆಗಳನ್ನು ಹಾಜರುಪಡಿಸುವುದು.

ಹೆಚ್ಚಿನ ಮಾಹಿತಿಗಾಗಿ ಈ ಕಛೇರಿಯ ಅಧಿಕೃತ ವೆಬ್‌ಸೈಟ್ http:Bangaloreurban.nic.in ರಲ್ಲಿ ಪರಿಶೀಲಿಸಬಹುದಾಗಿದೆ ಅಥವಾ ದೂರವಾಣಿ ಸಂ. 22211106 ಗಳನ್ನು ಸಂಪರ್ಕಿಸಬಹುದಾಗಿದೆ ಅಥವಾ **"ಅಧ್ಯಕ್ಷರು, ಆಯ್ಕೆ ಮತ್ತು ನೇಮಕಾತಿ ಪ್ರಾಧಿಕಾರ ಹಾಗೂ ಜಿಲ್ಲಾಧಿಕಾರಿ, ಬೆಂಗಳೂರು ನಗರ ಜಿಲ್ಲೆ, ಕೆ.ಜಿ. ರಸ್ತೆ, ಬೆಂಗಳೂರು-560 009"**ರವರ ಕಛೇರಿಯಲ್ಲಿ ಪಡೆಯಬಹುದಾಗಿದೆ.

**7. ಅಭ್ಯರ್ಥಿಯು ನಿಗದಿತ ಅರ್ಜಿ ಶುಲ್ಕವನ್ನು ಬ್ಯಾಂಕ್‌ಗೆ ಪಾವತಿಸುವ ಬಗ್ಗೆ:**

1. ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡ / ಪ್ರವರ್ಗ-1 / ಮಾಜಿ ಸೈನಿಕ -ರೂ. 200/-
2. ಇತರೆ ಅಭ್ಯರ್ಥಿಗಳು - ರೂ. 400/-

**8. ಜಾತಿ ಮೀಸಲಾತಿ ಪ್ರಮಾಣ ಪತ್ರಗಳು:**

ಜಾತಿ ಮೀಸಲಾತಿ ಕೋರಬಯಸುವ-

1. ಪ.ಜಾ/ಪ.ಪಂ. ಅಭ್ಯರ್ಥಿಗಳು- ನಮೂನೆ **"ಡಿ"**
2. ಪ್ರವರ್ಗ-1 ಅಭ್ಯರ್ಥಿಗಳು- ನಮೂನೆ **"ಇ"**
3. ಪ್ರವರ್ಗ-2ಎ, 2ಬಿ, 3ಎ, 3ಬಿ ಅಭ್ಯರ್ಥಿಗಳು - ನಮೂನೆ **'ಎಫ್'** ನಲ್ಲಿ ಸಂಬಂಧಪಟ್ಟ ತಹಶೀಲ್ದಾರ್ ರವರಿಂದ ಪ್ರಮಾಣ ಪತ್ರವನ್ನು ಪಡೆದು ಇದರ ದೃಢೀಕೃತ ನಕಲನ್ನು ಮೂಲ ದಾಖಲಾತಿ ಪರಿಶೀಲನಾ ಸಮಯದಲ್ಲಿ ಸಲ್ಲಿಸಬೇಕು.

**9. ಗ್ರಾಮೀಣ ಅಭ್ಯರ್ಥಿಗಳು:**

ಗ್ರಾಮೀಣ ಅಭ್ಯರ್ಥಿ ಎಂದರೆ ಒಂದು ಹುದ್ದೆಗಾಗಿ ಮೀಸಲಾದ ಅರ್ಹತಾ ಪರೀಕ್ಷೆಯು ಎಸ್.ಎಸ್.ಎಲ್.ಸಿ. ಅಥವಾ ಉನ್ನತ ಪರೀಕ್ಷೆಯಾಗಿದ್ದಲ್ಲಿ, 1ನೇ ತರಗತಿಯಿಂದ 10ನೇ ತರಗತಿಯವರೆಗೆ ಗ್ರಾಮೀಣ ವ್ಯಾಸಂಗದ ಪ್ರಮಾಣ ಪತ್ರವನ್ನು ಸಂಬಂಧಪಟ್ಟ ಪ್ರಾಧಿಕಾರಿಯಿಂದ ದೃಢೀಕೃತ ಗ್ರಾಮೀಣ ಪ್ರಮಾಣ ಪತ್ರವನ್ನು ಪಡೆದು ಹಾಜರುಪಡಿಸತಕ್ಕದ್ದು. ಗ್ರಾಮೀಣ ಮೀಸಲಾತಿಗೆ ಒಳಪಡುವ ಪ್ರದೇಶಗಳಲ್ಲಿ ವ್ಯಾಸಂಗ ಮಾಡಿ ಉತ್ತೀರ್ಣರಾಗಿರುವವರು ಮಾತ್ರ ಈ ಮೀಸಲಾತಿಗೆ ಅರ್ಹರಾಗಿರುತ್ತಾರೆ. ಗ್ರಾಮೀಣ ಅಭ್ಯರ್ಥಿಗಳಿಗೆಂದು ಮೀಸಲಿರಿಸಿದ ಹುದ್ದೆಗಳನ್ನು ಕ್ಲೇಮ್ ಮಾಡುವ ಸಾಮಾನ್ಯ ಅರ್ಹತೆಯ ಅಭ್ಯರ್ಥಿಗಳು ನಮೂನೆ-2 ರ ಪ್ರಮಾಣ ಪತ್ರವಲ್ಲದೇ ಮೇಲುಸ್ಥರಕ್ಕೆ ಸೇರಿಲ್ಲದಿರುವ ಬಗ್ಗೆ ನಮೂನೆ-1 ರಲ್ಲಿ ಪ್ರಮಾಣ ಪತ್ರವನ್ನು ಕಡ್ಡಾಯವಾಗಿ ಸಂಬಂಧಿತ ತಹಶೀಲ್ದಾರ್‌ರವರಿಂದ ಪಡೆದು ಅದರ ಒಂದೊಂದು ಫೋಟೋ ಪ್ರತಿಯನ್ನು ಹಾಜರುಪಡಿಸತಕ್ಕದ್ದು. ಅಂತೆಯೇ ಗ್ರಾಮೀಣ ಮೀಸಲಾತಿ ಕೋರುವ ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ, ಪ್ರವರ್ಗ-1, ಪ್ರವರ್ಗ-2ಎ, 2ಬಿ, 3ಎ, 3ಬಿ ಮೀಸಲಾತಿಗೆ ಸೇರಿದ ಅಭ್ಯರ್ಥಿಗಳು ಕಡ್ಡಾಯವಾಗಿ ಗ್ರಾಮೀಣ ಮೀಸಲಾತಿಯ ಪ್ರಮಾಣ ಪತ್ರವನ್ನು ನಮೂನೆ-2 ರಲ್ಲಿ ನಿಗದಿತ ಪ್ರಾಧಿಕಾರಿಗಳಿಂದ ಪಡೆದು ಸಂಬಂಧಪಟ್ಟ ಕ್ಷೇತ್ರ ಶಿಕ್ಷಣಾಧಿಕಾರಿಯವರಿಂದ ಮೇಲುರುಜು ಮತ್ತು ಮೊಹರು ಮಾಡಿಸಿಕೊಂಡು ಅದರ ಒಂದು ಪ್ರತಿಯನ್ನು ಹಾಜರುಪಡಿಸತಕ್ಕದ್ದು.

**10. ಅರ್ಹತಾ ಷರತ್ತುಗಳು:**

| | |
|---|---|
| **1.** | ಭಾರತೀಯ ನಾಗರೀಕನಾಗಿರತಕ್ಕದ್ದು. |
| **2.** | ಅಭ್ಯರ್ಥಿಯು ಮಾನಸಿಕವಾಗಿ ಮತ್ತು ದೈಹಿಕವಾಗಿ ಆರೋಗ್ಯವಂತರಾಗಿರಬೇಕು ಮತ್ತು ಅವರ ನೇಮಕಾತಿ ಹೊಂದುವ ಹುದ್ದೆಯ ಕರ್ತವ್ಯಗಳ ದಕ್ಷ ನಿರ್ವಹಣೆಗೆ ಆತಂಕವನ್ನುಂಟು ಮಾಡುವ ಸಂಭವವಿರುವ ಯಾವುದೇ ದೈಹಿಕ ನ್ಯೂನತೆಯಿಂದ ಮುಕ್ತರಾಗಿರಬೇಕು. |
| **3.** | ಗ್ರಾಮಲೆಕ್ಕಿಗರ ನೇಮಕಾತಿಗೆ ಮೀಸಲಿರಿಸಿರುವ ಅಂಗವಿಕಲ ಹುದ್ದೆಗಳು- ಕುಷ್ಟರೋಗದಿಂದ ಗುಣಮುಖ ರಾದವರು ( Leprosy Cured), ಶ್ರವಣದೋಷವುಳ್ಳವರು (Hearing impaired), ದೈಹಿಕ ಅಂಗವಿಕಲರು (Locomotor Disability) ಮತ್ತು ಮಾನಸಿಕ ಅಸ್ವಸ್ಥತೆ (Mentally ill) ಉಳ್ಳವರು ಮಾತ್ರ ಅರ್ಜಿ ಸಲ್ಲಿಸಬೇಕು. |
| **4.** | ದೈಹಿಕವಾಗಿ ಅನರ್ಹರಾಗಿದ್ದಲ್ಲಿ, ವೈದ್ಯಕೀಯ ಮಂಡಳಿಯ ವರದಿಯ ಮೇಲೆ ಅನರ್ಹರೆಂಬುದಾಗಿ ತಿರಸ್ಕರಿಸುವ ಪೂರ್ಣ ವಿವೇಚನೆಯನ್ನು ನೇಮಕಾತಿ ಪ್ರಾಧಿಕಾರ ಕಾಯ್ದಿರಿಸಿಕೊಂಡಿದೆ. |
| **5.** | ನಿಗದಿತ ಶೈಕ್ಷಣಿಕ ಜೊತೆಗೆ ಈ ಮೇಲ್ಕಂಡ ಅರ್ಹತೆಗಳನ್ನು ಹೊಂದಿ ವಯೋಮಿತಿಯೊಳಗಿರುವ ಅಭ್ಯರ್ಥಿಗಳು ನೇಮಕಾತಿಗಾಗಿ ಅರ್ಜಿ ಸಲ್ಲಿಸುವ ಅರ್ಹತೆಯನ್ನು ಹೊಂದಿರುತ್ತಾರೆ. |

**11. ಪ್ರಮುಖ ಸೂಚನೆಗಳು:**

**ಅಭ್ಯರ್ಥಿಗಳು ಕೆಳಕಾಣಿಸಿದ ಪ್ರಮಾಣ ಪತ್ರಗಳನ್ನು ಮೂಲ ದಾಖಲಾತಿ ಪರಿಶೀಲನಾ ಸಮಯದಲ್ಲಿ ಸಲ್ಲಿಸಬೇಕು.**

1. ಹುದ್ದೆಗಳಿಗೆ ನಿಗದಿಪಡಿಸಲಾದ ವಿದ್ಯಾರ್ಹತೆಯ ಅಂಕಪಟ್ಟಿ / ಪ್ರಮಾಣ ಪತ್ರ ಮತ್ತು ಕಂಪ್ಯೂಟರ್ ಜ್ಞಾನದ ಬಗ್ಗೆ ದಾಖಲೆ
2. ನಿಗದಿಪಡಿಸಿದ ಅರ್ಜಿ ಶುಲ್ಕವನ್ನು ಬ್ಯಾಂಕ್‌ಗೆ ಜಮಾ ಮಾಡಿದ ಮೂಲ ಚಲನ್.

3. ಜನ್ಮ ದಿನಾಂಕವನ್ನು ನಮೂದಿಸಿರುವ ಎಸ್.ಎಸ್.ಎಲ್.ಸಿ. ಅಥವಾ ತತ್ಸಮಾನ ಪರೀಕ್ಷೆಯ ಪ್ರಮಾಣ ಪತ್ರ / ವರ್ಗಾವಣೆ ಪತ್ರ / ಜನ್ಮ ದಿನಾಂಕವನ್ನು ತೋರಿಸುವ ಸಂಚಿತ ದಾಖಲೆಗಳ ದೃಢೀಕೃತ ಪತ್ರ.

4. ಪರಿಶಿಷ್ಟ ಜಾತಿ / ಪರಿಶಿಷ್ಟ ಪಂಗಡ, ಪ್ರವರ್ಗ–1, ಪ್ರವರ್ಗ–2ಎ, ಪ್ರವರ್ಗ–2ಬಿ, ಪ್ರವರ್ಗ–3ಎ, ಪ್ರವರ್ಗ–3ಬಿ ಗಳ ಪ್ರಮಾಣ ಪತ್ರಗಳು (ಮೀಸಲಾತಿ ಕೋರಿದ್ದಲ್ಲಿ).

5. ಗ್ರಾಮೀಣ ಮೀಸಲಾತಿ ಕೋರುವ ಸಾಮಾನ್ಯ ವರ್ಗದ ಅಭ್ಯರ್ಥಿಗಳು ನಮೂನೆ–2 ರ ಮೀಸಲಾತಿ ಪ್ರಮಾಣ ಪತ್ರದ ಜೊತೆಗೆ ನಮೂನೆ–1 ರಲ್ಲಿ ಅವರು ಮೇಲುಸ್ತರಕ್ಕೆ ಸೇರಿಲ್ಲದಿರುವ ಬಗ್ಗೆ ಸಂಬಂಧಪಟ್ಟ ತಾಲ್ಲೂಕು ತಹಶೀಲ್ದಾರರಿಂದ ಪಡೆದಿರುವ ಪ್ರಮಾಣ ಪತ್ರ.

6. ಗ್ರಾಮೀಣ ಮೀಸಲಾತಿಯನ್ನು ಕೋರುವ ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ, ಪ್ರವರ್ಗ–1,2ಎ,2ಬಿ,3ಎ,3ಬಿ ವರ್ಗಗಳಿಗೆ ಸೇರಿದ ಅಭ್ಯರ್ಥಿಗಳು ನಮೂನೆ–2 ರಲ್ಲಿ ಗ್ರಾಮೀಣ ಮೀಸಲಾತಿ ಪ್ರಮಾಣ ಪತ್ರ.

7. ಕನ್ನಡ ಮಾಧ್ಯಮದಲ್ಲಿ ವ್ಯಾಸಂಗ ಮಾಡಿದ ಪ್ರಮಾಣ ಪತ್ರ (ಮೀಸಲಾತಿ ಕೋರಿದ್ದಲ್ಲಿ)

8. ಅಂಗವೈಕಲ್ಯತೆ ಬಗ್ಗೆ ಪ್ರಮಾಣ ಪತ್ರ (ಮೀಸಲಾತಿ ಕೋರಿದ್ದಲ್ಲಿ)

9. ಸೈನಿಕ ಸೇವೆಯಿಂದ ಬಿಡುಗಡೆಯಾದ ಬಗೆಗಿನ ಪ್ರಮಾಣ ಪತ್ರ (ಮಾಜಿ ಸೈನಿಕ ಮೀಸಲಾತಿ ಕೋರಿದ್ದಲ್ಲಿ)

10. ಕ್ರ.ಸಂ. 3, 4, 5, 6, 7 ಮತ್ತು 8 ಕ್ಕೆ ಸಂಬಂಧಿಸಿದ ಪ್ರಮಾಣ ಪತ್ರಗಳನ್ನು ಅರ್ಜಿ ಸಲ್ಲಿಸುವ ಕೊನೆಯ ದಿನಾಂಕದೊಳಗೆ ಪಡೆದಿರಬೇಕು.

**12. ಬೆಂಗಳೂರು ಜಿಲ್ಲಾಧಿಕಾರಿಯವರೊಂದಿಗೆ ಪತ್ರ ವ್ಯವಹಾರ:**

ಬೆಂಗಳೂರು ಜಿಲ್ಲಾಧಿಕಾರಿಯವರ ಕಛೇರಿಯಿಂದ ಅಭ್ಯರ್ಥಿಯ ವಿಚಾರದಲ್ಲಿ ಅಭ್ಯರ್ಥಿಗಳೊಂದಿಗೆ ಯಾವುದೇ ಪತ್ರ ವ್ಯವಹಾರವನ್ನು ನಡೆಸತಕ್ಕದ್ದಲ್ಲ. ನೇಮಕಾತಿಗೆ ಅರ್ಜಿ ಸಲ್ಲಿಸಿದ ನಂತರ ವಿಳಾಸ ಬದಲಾವಣೆ ಇದ್ದಲ್ಲಿ ಅಭ್ಯರ್ಥಿಗಳು ಲಿಖಿತ ಮನವಿ ಮೂಲಕ ಬೆಂಗಳೂರು ಜಿಲ್ಲಾಧಿಕಾರಿಯವರ ಗಮನಕ್ಕೆ ತರತಕ್ಕದ್ದು.

**13. <u>ಇತರೆ ಸೂಚನೆಗಳು:</u>**

| | |
|---|---|
| 1. | ಅಭ್ಯರ್ಥಿಗಳು ಆನ್‌ಲೈನ್‌ನಲ್ಲಿ ಪಡೆದ Challan ಹಾಗೂ Acknowledgement Slip ಮಡಚುವುದಾಗಲೀ, ಹರಿಯುವುದಾಗಲೀ ಮಾಡದೇ ಹಾಳಾಗದಂತೆ ಎಚ್ಚರವಹಿಸತಕ್ಕದ್ದು. |
| 2. | ಸೇವೆಯಲ್ಲಿರುವ ಅಭ್ಯರ್ಥಿಗಳು ಅವರ ನೇಮಕಾತಿ ಪ್ರಾಧಿಕಾರದಿಂದ ನಿರಾಕ್ಷೇಪಣಾ ಪತ್ರ (No Objection Certificate) ಅನ್ನು ಪಡೆದು ಮೂಲ ದಾಖಲಾತಿ ಪರಿಶೀಲನಾ ಸಮಯದಲ್ಲಿ ಸಲ್ಲಿಸಬೇಕು.<br>ನೇಮಕಾತಿ ಬಗ್ಗೆ ಅಂತಿಮ ತೀರ್ಮಾನವನ್ನು ನೇಮಕಾತಿ ಪ್ರಾಧಿಕಾರದ ಅಧ್ಯಕ್ಷರಾದ ಜಿಲ್ಲಾಧಿಕಾರಿ, ಬೆಂಗಳೂರು ಜಿಲ್ಲೆ, ಬೆಂಗಳೂರು ಇವರು ಕಾಯ್ದಿರಿಸಿಕೊಂಡಿರುತ್ತಾರೆ |
| 3. | ಅಭ್ಯರ್ಥಿಯ ಹೆಸರು ಕೇವಲ ಅಂತಿಮ ಆಯ್ಕೆ ಪಟ್ಟಿಯಲ್ಲಿ ಬಂದಿದೆ ಎಂಬುದರ ಆಧಾರದ ಮೇಲೆ ಅಭ್ಯರ್ಥಿಗೆ ನೇಮಕಾತಿಯು ಯಾವುದೇ ಹಕ್ಕು ದೊರೆಯುವುದಿಲ್ಲ. ಆಯ್ಕೆಯ ಸಂಬಂಧವಾಗಿ ಈ ಕಛೇರಿಯೊಂದಿಗೆ ಯಾವುದೇ ಪತ್ರ ವ್ಯವಹಾರ ನಡೆಸಲು ಆಸ್ಪದ ಇರುವುದಿಲ್ಲ. |
| 4. | ವೆಬ್‌ಸೈಟ್‌ನಲ್ಲಿ ಅಂತಿಮ ಆಯ್ಕೆ ಪಟ್ಟಿ ಪ್ರಕಟಿಸಿದ ನಂತರ ಆಯ್ಕೆಯಾದ ಅಭ್ಯರ್ಥಿಗಳು ಸೂಚಿಸಿದ ದಿನಾಂಕದಂದು ತನ್ನ ಎಲ್ಲಾ ದಾಖಲಾತಿಗಳೊಂದಿಗೆ ಪರಿಶೀಲನಾ ಸಂದರ್ಶನಕ್ಕೆ ಈ ಕಛೇರಿಗೆ ನಿಗಧಿತ ಅವಧಿಯೊಳಗೆ ಹಾಜರಾಗತಕ್ಕದ್ದು. |
| 5. | ಆಯ್ಕೆಯಾದ ಅಭ್ಯರ್ಥಿಗಳು ಎರಡು ವರ್ಷಗಳ ಪರಿವೀಕ್ಷಣಾ ಅವಧಿ ಪೂರೈಸುವುದು ಕಡ್ಡಾಯವಾಗಿರುತ್ತದೆ. |
| 6. | ಸರ್ಕಾರದ ಅಧಿಸೂಚನೆ ಸಂ: ಡಿಪಿಎಆರ್ 54 ಎಸ್.ಆರ್.ಆರ್/2012 ದಿ: 23/06/2012 ರಲ್ಲಿ ಗ್ರಾಮಲೆಕ್ಕಿಗರ ಹುದ್ದೆಗೆ ಆಯ್ಕೆ ಮಾಡಲು ಗುರುತಿಸಿರುವ ಅಂಗವಿಕಲತೆಗೆ ಮಾತ್ರ ಕಾಯ್ದಿರಿಸಲಾಗಿದೆ |
| 7. | ಅಂಗವಿಕಲತೆಗೆ ಮೀಸಲಾತಿ ಪಡೆಯಲಿಚ್ಛಿಸುವ ಅಭ್ಯರ್ಥಿಗಳು ಸರ್ಕಾರದ ಆದೇಶ ಸಂ: ಸಿಆಸುಇ 115 ಸೇನನಿ 2005, ದಿನಾಂಕ: 19/11/2005 ರಲ್ಲಿ ನಿಗಧಿಪಡಿಸಿರುವ ನಮೂನೆಯಲ್ಲಿ ಅಂಗವೈಕಲ್ಯತೆ ಬಗ್ಗೆ ಸಂಬಂಧಪಟ್ಟ ಜಿಲ್ಲಾ ಮಟ್ಟದ ವೈದ್ಯಕೀಯ ಮಂಡಳಿಯು ನೀಡಿರುವ ಪ್ರಮಾಣ ಪತ್ರವನ್ನು ಹೊಂದಿರತಕ್ಕದ್ದು. |

**14. <u>ದುರ್ನಡತೆ:</u>**

ಒಬ್ಬ ಅಭ್ಯರ್ಥಿಯು ನಕಲಿ ವ್ಯಕ್ತಿಯಾಗಿರುವನೆಂದು ಅಥವಾ ಖೋಟಾ ದಸ್ತಾವೇಜು ಅಥವಾ ತಿದ್ದಲಾದ ದಸ್ತಾವೇಜುಗಳನ್ನು ಸಲ್ಲಿಸಿರುವನೆಂದು ಅಥವಾ ತಪ್ಪು ಅಥವಾ ಸುಳ್ಳು ಹೇಳಿಕೆ ನೀಡಿರುವನೆಂದು ಅಥವಾ ವಾಸ್ತವಿಕ ಮಾಹಿತಿಯನ್ನು ಮರೆ ಮಾಚಿರುವನೆಂದು ಅಥವಾ ಅವರ ನೇಮಕಾತಿಯ ಸಂಬಂಧದಲ್ಲಿ ಯಾವುದೇ ಇತರೆ ಅಕ್ರಮ ಮತ್ತು ಅನುಚಿತ ಮಾರ್ಗವನ್ನು ಅವಲಂಬಿಸಿರುವನೆಂದು ಕಂಡು ಬಂದಲ್ಲಿ ಅವನು/ಅವಳು ಸ್ವಂತ, ಕ್ರಿಮಿನಲ್ ವ್ಯವಹಾರಗಳಿಗೆ ಮತ್ತು ಶಿಸ್ತು ಕ್ರಮಕ್ಕೆ ಒಳಪಡುವುದಲ್ಲದೇ, ಹುದ್ದೆಯ ಆಯ್ಕೆಯಿಂದ ಅಭ್ಯರ್ಥಿಯನ್ನು ರದ್ದುಪಡಿಸಲಾಗುವುದು.

15. **ಆಯ್ಕೆ ವಿಧಾನ:**

ಕರ್ನಾಟಕ ಜನರಲ್ ಸರ್ವೀಸಸ್ (Revenue Subodinate Branch) (Cadre & Recruitment) (ತಿದ್ದುಪಡಿ) ನಿಯಮಗಳು 2008 ಮತ್ತು ಕರ್ನಾಟಕ ನಾಗರೀಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು 1977ರ ಪ್ರಕಾರ ಅಭ್ಯರ್ಥಿಯನ್ನು ಅವರು ಪಿ.ಯು.ಸಿ. ಅಥವಾ ಸಿ.ಬಿ.ಎಸ್.ಎ. ಅಥವಾ ಐ.ಸಿ.ಎಸ್.ಇ. ನಡೆಸುವ 12ನೇ ತರಗತಿ ಪರೀಕ್ಷೆಯಲ್ಲಿ ಪಡೆದ ಅಂಕಗಳ(on merit) ಆಧಾರದ ಮೇಲೆ ಆಯಾಯ ಮೀಸಲಾತಿ ಪ್ರವರ್ಗಕ್ಕೆ ಸಂಬಂಧಿಸಿದಂತೆ ಆಯ್ಕೆ ಮಾಡಲಾಗುವುದು.

**ವಿ. ಶಂಕರ್**

**PR. 125** ಅಧ್ಯಕ್ಷರು, ಆಯ್ಕೆ ಮತ್ತು ನೇಮಕಾತಿ

**SC. 50** ಪ್ರಾಧಿಕಾರ ಹಾಗೂ ಜಿಲ್ಲಾಧಿಕಾರಿ ಬೆಂಗಳೂರು ಜಿಲ್ಲೆ, ಬೆಂಗಳೂರು

## KARNATAKA PUBLIC SERVICE COMMISSION , 'UDYOGA SOUDHA ' BANGALORE – 1

### NOTIFICATION

**No. PSC 13 RTB 2013, Dated : 21/10/14**

In pursuance of this Office Notification No. PSC 1 RTB-1/2013 dated:01/06/13,the Provisional Select List of candidates for 03 (BL)posts of ASST.DIRECTOR IN PHYSICAL EDUCATION & SPORTS in the Department of TECHNICAL EDUCATION (GOVT ENGINEERING COLLEGE) prepared on the basis of Rule 8(1) of Karnataka Civil Services (Direct Recruitment by Competitive Examinations and Selection) (General) Rules,2006,as amended from time to time was published vide Notification of even number dated 27/09/2014 inviting objections,if any,from candidates within 15 days of its publication.The objections received within the stipulated time have been examined and the final selection list is hereby published for information of the candidates

Appointing Authority : DIRECTOR

Name of the Department : TECHNICAL EDUCATION

| SL.NO. | NAME OF THE CANDIDATE | INT.NO. | D_O_B | RESVN.<br>QUALIFICATION |
|---|---|---|---|---|
| 1 | THULASIMALA K<br>PHYSICAL EDUCATION TEACHER GRADE 1<br>GOVT BOYS JUNIOR COLLEGE D.V.G. ROAD<br>BAGEPALLI (T) CHIKBALLAPUR 561207 | 8 | 29/06/80 | SC/W<br>M.P.Ed/NET |
| 2 | PRASAD SALIAN<br>SRI HARI NILAYA<br>S.S ROAD HEJAMADI<br>UDUPI TQ & DIST 574103 | 4 | 28/08/84 | SC<br>M.P.Ed/NET |
| 3 | NAGESHA<br>GANDATHURE VILLAGE<br>BEERAMBALLI POST<br>H D KOTE TALUK MYSORE 571116 | 2 | 16/12/83 | ST<br>MPED AND K SLET |

**MANOJ KUMAR MEENA I.A.S**

**PR. 126** Secretary

**SC. 50** Karnataka Public Service Commission. Bangalore-01

## KARNATAKA PUBLIC SERVICE COMMISSION , 'UDYOGA SOUDHA ' BANGALORE – 1

### NOTIFICATION

**No. PSC 16 RTB 2012 , Dated : 21/10/14**

In pursuance of this Office Notification No. R(2)310/2012-13/PSC dated:09/01/13,the Provisional Select List of candidate for 01 post of Assistant Professor (Pharmaceutical Chemistry) in Government Pharmacy College in the Department of Drugs control prepared on the basis of Rule 8(1) of Karnataka Civil Services(Direct Recruitment by Competitive Examinations and Selection)

R.N.I. No. KARBIL/2001/47147 POSTAL REGN. No. RNP/KA/BGS/2202/2014-16
Licensed to post without prepayment **WPP No. 297**



(General) Rules,2006,as amended from time to time was published vide Notification of even number dated 27/09/2014 inviting objections,if any,from candidates within 15 days of its publication.No objections have been received within the stipulated time.

Hence the final selection list is hereby published for information of the candidates

Appointing Authority : Government

Name of the Department : Drugs control - Government Pharmacy College

| SL.NO. | NAME OF THE CANDIDATE | INT.NO. | D_O_B | RESVN. QUALIFICATION |
|---|---|---|---|---|
| 1 | SATHISH .N.K S/O KANTHAPPA NC C/O THIMMEGOWDA TEACHER H NO. 587 VIDYA NAGARA CHANNARAYA PATNA HASSAN 573116 | 1 | 12/09/76 | SC M. Pharma(Pharmaceutical Chemistry) |

**MANOJ KUMAR MEENA I.A.S**
Secretary
Karnataka Public Service Commission. Bangalore-01

**PR. 127**
**SC. 50**

*ಮುದ್ರಕರು ಹಾಗೂ ಪ್ರಕಾಶಕರು:–* ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯಪತ್ರ, ಸರ್ಕಾರಿ ಕೇಂದ್ರ ಮುದ್ರಣಾಲಯ, ಬೆಂಗಳೂರು–59